ನಿರ್ಲಕ್ಷಿಸಿ ಮಾರಾಟ ಮಾಡಿದರೂ, ಈ ಸ್ವತ್ತುಗಳನ್ನು ಖರೀದಿಸಿದಲ್ಲಿ ಪರಭಾರೆ ಮಾಡಿದಲ್ಲಿ ಅಥವಾ ಇನ್ನಾವುದೇ ವಿಧದಲ್ಲಿ ವರ್ಗಾಯಿಸಿಕೊಂಡಲ್ಲಿ ಅದು ಸಾಧ್ಯವಾಗುವುದಿಲ್ಲ ಎಂದು ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರಲಾಗಿದೆ.

ದುರುಪಯೋಗದಾರರು ಈ ಜಪ್ತಿ ಆದೇಶದ ವ್ಯಾಪ್ತಿಯಿಂದ ಹೊರಬರಲು ಇಚ್ಛಿಸಿದಲ್ಲಿ ಜಪ್ತಿಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ತಕ್ಕಷ್ಟು ಮತ್ತು ನ್ಯಾಯಾಲಯವು ಸರಿಯೆಂದು ಭಾವಿಸುವ ನಗದು ಭದ್ರತೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಹೆಸರಿನಲ್ಲಿ ತುಮಕೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ (ನಿ), ಮಧುಗಿರಿ ಶಾಖೆ, ಮಧುಗಿರಿ ಈ ಬ್ಯಾಂಕಿನಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ಮೂಲ ಚಲನ್ ಪ್ರತಿಯನ್ನು ದಿನಾಂಕ: 13.12.2003ರ ಒಳಗೆ ಈ ನ್ಯಾಯಾಲಯಕ್ಕೆ ಹಾಜರ್‌ಪಡಿಸುವುದರ ಮೂಲಕ ಜಪ್ತಿ ಆದೇಶದಿಂದ ಹೊರಗುಳಿಯಬಹುದೆಂದು ಸಹ ತಿಳಿಸಲಾಗಿದೆ. ಸದರಿ ನಿಗದಿತ ಅವಧಿಯೊಳಗೆ ನಗದು ಭದ್ರತೆ ನೀಡಲು ವ್ಯಾಜ್ಯದ ಎದರು ಅರ್ಜಿದಾರರು ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತಿ ಆದೇಶ ಸ್ಥಿರಗೊಳ್ಳುವುದಲ್ಲದೆ ಖಾಯಂಗೊಳ್ಳುವುದು ಎಂದು ತಿಳಿಯತಕ್ಕದ್ದು.

| ಕ್ರ. ಸಂ. | ಖಾತೆದಾರರ : ಹಕ್ಕುದಾರನ ಹೆಸರು ಮತ್ತು ವಿಳಾಸ | ಖಾತೆ ನಂ. | ಸ.ನಂ. | ವಿಸ್ತೀರ್ಣ ಎ-ಗುಂಟೆ | ತರಹೆ | ಚೆಕ್ಕುಬಂದಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ನಾಗರತ್ನಮ್ಮ ಕೋಂ ರಾಮಕೃಷ್ಣಪ್ಪ ಕೆ. ಕಸಬಾ ಹೋಬಳಿ, ಕೊಟ್ಟ (ನಾಗಮ್ಮ) | 1040 | 45:1 | 7-12 | ಖುಷ್ಕಿ | ಪೂರ್ವ-ನಂಜುಂಡಯ್ಯ<br>ಪಶ್ಚಿಮ-ಸರ್ಕಾರಿ ಜಮೀನು<br>ಉತ್ತರ-ಸರ್ಕಾರಿ ಜಮೀನು<br>ದಕ್ಷಿಣ-ಈಶ್ವರಾಚಾರ್ |
| 2. | ಕೆ. ರಾಮಕೃಷ್ಣಪ್ಪ ಬಿನ್ ಕರಿಯಣ್ಣ, ಗೌಡಗೆರೆ ಹೋಬಳಿ, ಬಂದಕುಂಟೆ, ಶಿರಾ ತಾಲ್ಲೂಕು. | 49 | 58:1 | 0.11 1/4 | ಭಾಗಾಯ್ತು | ಪೂರ್ವ-ಗೋವಿಂದಪ್ಪ<br>ಪಶ್ಚಿಮ-ಬೆಟ್ಟದಸ್ವಾಮಿ<br>ಉತ್ತರ-ಕಾರನಾಗಪ್ಪ<br>ದಕ್ಷಿಣ-ಆರ್. ಕೃಷ್ಣಪ್ಪ |
| 3. | - ” - | 49 | 58.5 | 0.04 1/4 | ಖುಷ್ಕಿ | ಪೂರ್ವ-ಸರ್ಕಾರಿ ರಸ್ತೆ<br>ಪಶ್ಚಿಮ-ಗುರುಸಿದ್ದಪ್ಪ<br>ಉತ್ತರ-ಗೋವಿಂದಪ್ಪ<br>ದಕ್ಷಿಣ-ಗುರುಸಿದ್ದಪ್ಪ |
| 4. | - ” - | 49 | 58:7 | 0.29 1/4 | ಭಾಗಾಯ್ತು | ಪೂರ್ವ-ಗುರುಲಿಂಗಪ್ಪ<br>ಪಶ್ಚಿಮ-ಗೋವಿಂದಪ್ಪ<br>ಉತ್ತರ-ಆರ್. ಕೃಷ್ಣಪ್ಪ<br>ದಕ್ಷಿಣ-ಜಯರಾಮಪ್ಪ |
| 5. | - ” - | 49 | 95:(1+3) | 0.23 1/4 | ಖುಷ್ಕಿ | ಪೂರ್ವ-ಗಿರಿಯಮ್ಮ<br>ಪಶ್ಚಿಮ-ಕಾರನಾಗಪ್ಪ<br>ಉತ್ತರ-ಜುಂಜಣ್ಣ<br>ದಕ್ಷಿಣ-ಗೋವಿಂದಪ್ಪ |
| 6. | - ” - | 49 | 97:15 | 0.08 | -”- | ಪೂರ್ವ-ರಸ್ತೆ<br>ಪಶ್ಚಿಮ-ಗೋವಿಂದಪ್ಪ<br>ಉತ್ತರ-ಗೋಪಾಲಪ್ಪ<br>ದಕ್ಷಿಣ-ಜುಂಜಣ್ಣ |
| 7. | - ” - | 1006 | 445 | 2.14 | -”- | ಪೂರ್ವ-ಕರಿಯಣ್ಣ<br>ಪಶ್ಚಿಮ-ಕರಿಯಣ್ಣ<br>ಉತ್ತರ-ಛೇ: ಮಹಲಿಂಗಪ್ಪ<br>ದಕ್ಷಿಣ-ಛೇ: ಮಹಲಿಂಗಪ್ಪ |
| 8. | ನಾಗಮ್ಮ ಕೋಂ ಕೆ. ರಾಮಕೃಷ್ಣಪ್ಪ ಬಂದಕುಂಟೆ, ಮೇಲ್ಕುಂಟೆ ಗ್ರಾಮ, ಪಂಚಾಯಿತಿ, ಶಿರಾ ತಾ: | 189 | ನಂ.8 | ನಿವೇಶನ | -”- | ಪೂರ್ವ-ಕೆ. ರಾಮಕೃಷ್ಣಪ್ಪನವರ ಮನೆ.<br>ಪಶ್ಚಿಮ-ರಸ್ತೆ<br>ಉತ್ತರ-ಕರಿಯಣ್ಣನ ನಿವೇಶನ<br>ದಕ್ಷಿಣ-ಕೃಷ್ಣಪ್ಪನ ಮನೆ ಮತ್ತು ಗ್ರಾಮ |

| 1 | 2 | 3 | 4 | 5 | 6 | 7 |
|---|---|---|---|---|---|---|
| 9. | ರಾಮಕೃಷ್ಣಪ್ಪ ಬಿನ್ ಕರಿಯಣ್ಣ | 276 | - | ಮನೆ | - | ಪೂರ್ವ-ರಸ್ತೆ<br>ಪಶ್ಚಿಮ-ನಾಗಮ್ಮನವರ ನಿವೇಶನ<br>ದಕ್ಷಿಣ-ಗೋಪಾಲಪ್ಪ<br>ಉತ್ತರ-ಕರಿಯಣ್ಣನ ಮನೆ. |

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ನ್ಯಾಯಾಲಯದ ಮೊಹರಿನೊಂದಿಗೆ ದಿನಾಂಕ: 3.11.2003 ರಂದು ನೀಡಿರುತ್ತೇನೆ.

**ಟಿ. ಮುರುಳಿಕೃಷ್ಣಪ್ಪ**

ಪಿ.ಆರ್. 1338

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

## ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ

**ಅಧಿಸೂಚನೆ ಸಂಖ್ಯೆ: ಎಫ್‌ಒಸಿ:ಸಿಎಎನ್:ಸಿಆರ್-17/2003-04, ದಿನಾಂಕ: 15ನೇ ನವೆಂಬರ್ 2003**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಬೀಟೆ ಜಾತಿಯ ನೈಜು ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ತರೀಕೆರೆ ವಲಯದ ವನಪಾಲಕರು ಮತ್ತು ರಕ್ಷಣಾ ಸಿಬ್ಬಂದಿಯವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು, ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಈ ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನಗಳ ವಿವರ | ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | ಟ್ರಾಕ್ಟರ್ ಮತ್ತು ಟ್ರೈಲರ್ ಸಂಖ್ಯೆ: ಕೆಎ-18-ಟಿ-4258/ಟಿ 4259 | ತರೀಕೆರೆ ವಲಯದ ಅ.ಮೊ.ಸಂಖ್ಯೆ: 91/03-04 ದಿನಾಂಕ: 1.11.2003 | ಎನ್‌ಎಕ್ಸ್‌ಸಿ 241516 | ಬಿಎಸ್‌ಎನ್ 238944 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರೂ ವಾರಸುದಾರರು ಇಲ್ಲಿಯವರೆಗೂ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕುಬಾಧ್ಯತೆಗಳನ್ನು ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಸಿಯನ್ನು ಬರಹದ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,

ಪಿ.ಆರ್. 1339 ಭದ್ರಾವತಿ ವಿಭಾಗ, ಭದ್ರಾವತಿ.

## ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ

**ಅಧಿಸೂಚನೆ ಸಂಖ್ಯೆ: ಎಫ್‌ಒಸಿ:ಸಿಎಎನ್:ಸಿಆರ್-15/2003-04, ದಿನಾಂಕ: 15ನೇ ನವೆಂಬರ್ 2003**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಬೀಟೆ ಜಾತಿಯ ನೈಜು ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ತರೀಕೆರೆ ವಲಯದ ವನಪಾಲಕರು ಮತ್ತು ರಕ್ಷಣಾ ಸಿಬ್ಬಂದಿಯವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು, ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಈ ಕೆಳಕಂಡಂತಿರುತ್ತದೆ.

| ಕ್ರ.ಸಂ. | ವಾಹನಗಳ ವಿವರ | ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | ಆಟೋರಿಕ್ಷ ಸಂಖ್ಯೆ: ಕೆಎ-14-1011 | ತರೀಕೆರೆ ವಲಯದ ಅ.ಮೊ.ಸಂಖ್ಯೆ: 86/03-04 ದಿನಾಂಕ: 23.10.2003. | ಇ 22 ಬಿಎಲ್ 05664 | 22 ಬಿ 016209 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರೂ ವಾರಸುದಾರರು ಇಲ್ಲಿಯವರೆಗೂ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕುಬಾಧ್ಯತೆಗಳನ್ನು ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಸಿಯನ್ನು ಬರಹದ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ

ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಪಿ.ಆರ್. 1340 ಭದ್ರಾವತಿ ವಿಭಾಗ, ಭದ್ರಾವತಿ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಹಾಸನ**

**ಅಪರಾಧ ಸಂಖ್ಯೆ: ಅಮೊ:9,10,40:2003-2004 ದಿನಾಂಕ: 24ನೇ ನವೆಂಬರ್ 2003**

**ಪ್ರಕಟಣೆ**

ಹಾಸನ ಅರಣ್ಯ ಸಂಚಾರಿ ದಳ, ಹಾಸನ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ಈ ಕೆಳಕಂಡ ವಾಹನವನ್ನು ಅರಣ್ಯ ಸಂಚಾರಿ ದಳ, ಹಾಸನ ವಿಭಾಗದ ಅಧಿಕಾರಿಗಳು ಹಾಗೂ ಸಿಬ್ಬಂದಿಗಳು ಸರ್ಕಾರದ ಪರ ಅಮಾನತ್ತುಪಡಿಸಿ, ಕರ್ನಾಟಕ ಅರಣ್ಯ ಕಾಯಿದೆ 1963ರ ಕಂಡಿಕೆ 71ಎ ಪ್ರಕಾರ ಕ್ರಮ ತೆಗೆದುಕೊಳ್ಳುವ ಸಲುವಾಗಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಹಾಸನರವರ ಸಮಕ್ಷಮ ಹಾಜರುಪಡಿಸಿರುತ್ತಾರೆ.

ಅಮಾನತ್ತುಪಡಿಸಿರುವ ವಾಹನಗಳ ತಪಶೀಲು ಈ ಕೆಳಗಿನಂತಿದೆ

| ಕ್ರ. ಸಂ. | ಮೊಕದ್ದಮೆ ಸಂಖ್ಯೆ ದಾಖಲಿಸಿದ ಅಧಿಕಾರಿ | ವಾಹನದ ವಿವರ | ನೋಂದಣಿ ಸಂಖ್ಯೆ | ಇಂಜಿನ್ ಸಂಖ್ಯೆ | ಚಾಸೀಸ್ ಸಂಖ್ಯೆ | ವಶಪಡಿಸಿಕೊಂಡ ಶ್ರೀಗಂಧ |
|---|---|---|---|---|---|---|
| 1) | ಅಮೊ:9:03-04 ದಿನಾಂಕ: 10.6.2003 ಸಅಸಂ:ಸಿಬ್ಬಂದಿ | ಫಿಯಟ್ ಕಾರು | ಕೆಎ-01-ಎಂ- 5255 | ಕಂಡು ಬರುತ್ತಿಲ್ಲ | ಪ್ರೀಮಿಯರ್ ಎಕ್ಸ್‌ಪಿಎಂ 801969 ಡಿ:1370:2897 | 150 ಕೆಜಿ |
| 2) | ಅಮೊ:10:03-04 ದಿನಾಂಕ: 10.6.2003 ಸಅಸಂ:ಸಿಬ್ಬಂದಿ | ಮಾರುತಿ ಕಾರು | ಕೆಎ-04-ಪಿ: 5286 (ಡೂಪ್ಲಿಕೇಟ್ ನಂಬರ್) | ಎಫ್-8-ಬಿಐಎನ್ 1183752 | ಎಸ್:308:ಐಎನ್: 787030 | 101 ಕೆಜಿ |
| 3) | ಅಮೊ:40:03-04 ದಿನಾಂಕ: 20.9.2003 ಸಅಸಂ:ಸಿಬ್ಬಂದಿ | ಮಾರುತಿ ವ್ಯಾನ್ | ಕೆಎ-03-8941 | 28293 | ಎಸ್‌ಟಿ:91:ಐಎನ್: 931605 | 70 ಕೆಜಿ |

ಇದುವರೆವಿಗೂ ಮೇಲ್ಕಾಣಿಸಿದ ವಾಹನಗಳ ಹಾಗೂ ಶ್ರೀಗಂಧದ ಬಗ್ಗೆ ಯಾರೂ ಹಾಜರಾಗಿ ಕ್ಲೈಮ್ಸ್ ಸಲ್ಲಿಸಿರುವುದಿಲ್ಲ. ಆದುದರಿಂದ ಅವುಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಮತ್ತು ತಮ್ಮ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಹಾಗೂ ವಾಹನವನ್ನು ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ತೊಡಗಿರುವುದಕ್ಕೆ ಸದರಿ ವಾಹನವನ್ನು ಸರ್ಕಾರದ ಪರ ಯಾಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ಬಗ್ಗೆ ಅಧಿಕೃತ ಕಾರಣಗಳೊಂದಿಗೆ ಈ ಪ್ರಕಟಣೆಯು ಪ್ರಕಟಗೊಂಡ 30 (ಮೂವತ್ತು) ದಿನಗಳೊಳಗೆ ಈ ಕೆಳ ಸಹಿ ಮಾಡಿರುವವರ ಸಮಕ್ಷಮ ಹಾಜರುಪಡಿಸುವಂತೆ ತಿಳಿಸಿದೆ. ನಿಗದಿತ ಅವಧಿಯೊಳಗೆ ಯಾರೂ ಕ್ಲೈಮ್ ಮಾಡದಿದ್ದ ಪಕ್ಷದಲ್ಲಿ ಸದರಿ ವಾಹನವನ್ನು ಅದರಲ್ಲಿ ಕಳ್ಳ ಸಾಗಾಣಿಕೆ ಮಾಡುತ್ತಿದ್ದ ಶ್ರೀಗಂಧದ ಸಮೇತ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಎ (2ನೇ ತಿದ್ದುಪಡಿ) 1976ರ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಎಂಬುದಾಗಿ ಈ ಮೂಲಕ ಪ್ರಕಟಿಸಲಾಗಿದೆ.

ಎಂ.ಬಿ. ಭೀಮಯ್ಯ
ಪಿ.ಆರ್. 1341 ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಹಾಸನ.

**ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಕ್ರ: ಬಿ3:ಅಮೊ:ವಾಹನ:7/94-95, ದಿನಾಂಕ: 25ನೇ ನವೆಂಬರ್ 2003**

**ಉಪಸ್ಥಿತರು:** ಶ್ರೀ ಶಿವರಾಜ್ ಸಿಂಗ್, ಭಾ.ಅ.ಸೆ.,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.
**ಫಿರ್ಯಾಧಿದಾರರು:** ವಲಯ ಅರಣ್ಯಾಧಿಕಾರಿ, ಸಾಗರ ವಲಯ.
**ಬಾಧ್ಯತೆದಾರರು:** ಶ್ರೀ ಅಬ್ಬಾಸ್ ಅಲ್ಲಾವುದ್ದೀನ್ ಪಿರ್ಜಾಡೆ ಬಿನ್ ಅಲ್ಲಾವುದ್ದೀನ್ ಪಿರ್ಜಾಡ್,
ಖಾಜಿವಾಡ ಗುರುವಾರ್ ಪೇಟೆ, ನಾಡಾಪಗಲ್ಲಿ, ಮಿರಜ್ ತಾ: ಸಾಂಗ್ಲಿ ಜಿಲ್ಲೆ, ಮಹಾರಾಷ್ಟ್ರ ರಾಜ್ಯ.

**ಪ್ರಸ್ತಾವನೆ:**

ವಲಯ ಅರಣ್ಯಾಧಿಕಾರಿ ಸಾಗರ ಮತ್ತು ಸಿಬ್ಬಂದಿಯವರು ಖಚಿತ ವರ್ತಮಾನದ ಮೇರೆಗೆ ದಿನಾಂಕ: 30.7.1994 ರಂದು ಆವಿನಹಳ್ಳಿ ಹೋಬಳಿ, ಸಾತಾಳು ಗ್ರಾಮದ ಪಕ್ಕ 1986ನೇ ಸಾಲಿನ ಎಂಪಿಎಂ ಅಕೇಶಿಯ ನೆಡುತೋಪಿನಲ್ಲಿ ಅವಿತು ಕುಳಿತಿದ್ದು ಬೆಳಿಗ್ಗೆ ಸುಮಾರು 11.00 ಗಂಟೆಯ ಸಮಯದಲ್ಲಿ ಒಂದು ನೀಲಿ ಬಣ್ಣದ ವಾಹನ ನೆಡುತೋಪಿನಿಂದ ಸಾಗರದ ಕಡೆಗೆ ಬರುತ್ತಿರುವುದನ್ನು ಕಂಡು ಅದನ್ನು ತಡೆಯಲು ಮುಂದಾಗಿರುತ್ತಾರೆ. ಇದನ್ನು ಗಮನಿಸಿ ದೂರದಲ್ಲಿ ವಾಹನವನ್ನು ನಿಲ್ಲಿಸಿ ಅದರಲ್ಲಿದ್ದ 4 ಜನ ಆರೋಪಿಗಳು ಪರಾರಿಯಾಗಿರುತ್ತಾರೆ. ತರುವಾಯ ಪಂಚರ ಸಮಕ್ಷಮ ವಾಹನವನ್ನು ಪರಿಶೀಲಿಸಿದಾಗ ವಾಹನವು ಮಹೀಂದ್ರ ನಿಶಾನ್ ಅಲ್ವೀನ್ 576, ಕೆಎ 23 4393, ಇಂಜಿನ್ ನಂ. ಎನ್ 2 0112 ಎಂದು ಕಂಡು ಬಂದಿರುತ್ತದೆ. ವಾಹನದಲ್ಲಿ ಶ್ರೀಗಂಧದ ತುಂಡುಗಳು, ಬುಡಗಳು, ಬೇರು

ಮತ್ತು ಚಿಕ್ಕೆಗಳು ತುಂಬಿದ್ದು ಕಂಡು ಬಂದಿರುತ್ತದೆ. ಅದಾವುದಕ್ಕೂ ಛಾಪಾ ವಗೈರೆ ಇಲ್ಲದೆ ವಾಹನದಲ್ಲಿ ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿರುವುದರಿಂದ ಕಾನೂನು ಬಾಹಿರ ಕ್ರಮವಾಗಿದ್ದು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 62, 84, 86, 87, 71ಎ ಮತ್ತು ಕರ್ನಾಟಕ ಅರಣ್ಯ ನಿಯಮ 1969ರ ನಿಯಮ 165, 84ರ ಪ್ರಕಾರ ಅರಣ್ಯ ಮೊಕದ್ದಮೆಯನ್ನು ಜರುಗಿಸಿದ್ದು ವಾಹನ ಮತ್ತು 1350 ಕೆ.ಜಿ. ಶ್ರೀಗಂಧವನ್ನು ಈ ನ್ಯಾಯಾಲಯದ ಸಮಕ್ಷಮ ಒಪ್ಪಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿ ಸಾಗರ ಇವರು ಒಪ್ಪಿಸಿದ ಎಫ್ಐಆರ್, ಮಹಜರ್, ಸೀಜರ್ ರಿಪೋರ್ಟ್‌ಗಳನ್ನು ಅನುಸರಿಸಿ ಸುರಕ್ಷಿತತೆಯ ದೃಷ್ಟಿಯಿಂದ ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ ಸಾಗರ ಇವರ ಸುಪರ್ಧಿಗೆ ವಹಿಸಿಕೊಟ್ಟಿರುತ್ತದೆ. ಈ ನ್ಯಾಯಾಲಯದ ಸಮ ಸಂಖ್ಯೆಯ ಪ್ರಕಟಣೆ ದಿನಾಂಕ: 18.8.1994ನ್ನು ದಿನಪತ್ರಿಕೆಗಳಲ್ಲಿ ಪ್ರಕಟಪಡಿಸಲು ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕೇಳಲಾಗಿದೆ. ಅದೇ ಪ್ರಕಟಣೆಯನ್ನು ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರ, ಬೆಂಗಳೂರು ಇವರಿಗೆ ಕಳುಹಿಸಿದ್ದು ಗೆಜೆಟ್‌ನಲ್ಲಿ ಪ್ರಚುರಪಡಿಸಲು ಕೇಳಲಾಗಿತ್ತು. ಸದ್ರಿ ಪ್ರಕಟಣೆಯಲ್ಲಿ ಅರಣ್ಯ ಉತ್ಪನ್ನ ಅಕ್ರಮ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೇಕೆ? ಎಂಬ ಬಗ್ಗೆ ಪ್ರಕಟಣೆ ಪ್ರಕಟಗೊಂಡ ದಿನಾಂಕದಿಂದ 15 ದಿನಗಳ ಒಳಗಾಗಿ ಸಂಬಂಧಪಟ್ಟ ವಾಹನ ಮಾಲೀಕರಿಗೆ ಸಾಬೀತುಪಡಿಸಲು ತಿಳಿಸಲಾಗಿತ್ತು. ಸದ್ರಿ ಪ್ರಕಟಣೆಯು ದಿನಾಂಕ: 27.8.1994ರ ಉದಯವಾಣಿ ಮತ್ತು ಕನ್ನಡಪ್ರಭ ದಿನಪತ್ರಿಕೆಯಲ್ಲಿ ಹಾಗೂ ದಿನಾಂಕ: 20.10.1994ರ ರಾಜ್ಯಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಈ ನ್ಯಾಯಾಲಯದ ಸಮ ಸಂಖ್ಯೆಯ ಪತ್ರ ದಿನಾಂಕ: 18.8.1994 ರಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕೋಡಿ ಇವರಿಗೆ ವಾಹನದ ಬಿ ಪ್ರತಿಯನ್ನು ಕಳುಹಿಸಲು ತಿಳಿಸಲಾಗಿರುತ್ತದೆ. ಮುಂದುವರಿದು, ವಾಹನದಲ್ಲಿ ದೊರೆತ ಎಂ ಹೆಚ್ಎ 4082 ಎಂಬ ಮಾಹಿತಿಯನ್ನು ಅನುಸರಿಸಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಸಾಂಗ್ಲಿ ಇವರಿಗೆ ಬಿ ಪ್ರತಿಯನ್ನು ಕಳುಹಿಸಲು ಈ ನ್ಯಾಯಾಲಯದ ಪತ್ರ ದಿನಾಂಕ: 4.8.95 ರಲ್ಲಿ ತಿಳಿಸಿದೆ. ಅದಕ್ಕೆ ಪ್ರತಿಯಾಗಿ ಅವರು ದಿನಾಂಕ: 30.8.1995 ರಲ್ಲಿ ವಾಹನದ ಬಿ ಪ್ರತಿಯನ್ನು ಪ್ರಾದೇಶಿಕ ಸಾರಿಗೆ ಕಛೇರಿ ಸಾಂಗ್ಲಿಯಿಂದ ಕಳುಹಿಸಿರುತ್ತಾರೆ. ಅದರ ಮುಂದುವರಿಕೆಯಾಗಿ ಈ ನ್ಯಾಯಾಲಯದ ಸಮ ಸಂಖ್ಯೆಯ ಪತ್ರ ದಿನಾಂಕ: 30.4.1996ನ್ನು ಶ್ರೀ ಅಬ್ಬಾಸ್ ಅಲ್ಲಾಹುದ್ದೀನ್ ಪರ್ಜಾದೆ, ಗುರುವಾರಪೇಟೆ ಇವರಿಗೆ ಕಳುಹಿಸಿದ್ದು ಶ್ರೀಗಂಧ ಅಕ್ರಮ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೇಕೆ ಎಂಬ ಬಗ್ಗೆ ಸಮಜಾಯಿಸಿಯನ್ನು ನೀಡಲು ತಿಳಿಸಿದೆ. ಅದಕ್ಕೆ ದಿನಾಂಕ: 14.5.1996 ರಲ್ಲಿ ತಮ್ಮ ವಕೀಲರ ಮೂಲಕ ಸಲ್ಲಿಸಿದ ಮನವಿಯಲ್ಲಿ ವಿವರಣೆ ನೀಡಿರುತ್ತಾರೆ. ಅದರಲ್ಲಿ ಕ್ಲೇಮುದಾರರು ಎಂಹೆಚ್ 10ಎ 4082 (ಸೀಜರ್ ಲಾರಿ ನಂ. ಕೆಎ 23 4393)ರ ಮಹೀಂದ್ರ ನಿಸ್ಸಾನ್ ಅಲ್ವಿನ್ ಲಾರಿಯ ಮಾಲೀಕರಿರುತ್ತಾರೆ. ಅವರು ಮುಗ್ದರಿರುತ್ತಾರೆ. ಅವರು ಲಾರಿಯನ್ನು ಮನೆಯ ಮುಂಭಾಗದಲ್ಲಿ ನಿಲ್ಲಿಸಿದ್ದು ದಿನಾಂಕ: 24.7.1994ರ ರಾತ್ರಿ ಕಳುವಾಗಿರುತ್ತದೆ. ಈ ಸಂಬಂಧ ದಿನಾಂಕ: 25.7.1994 ರಲ್ಲಿ ಕರಾಡ ಟೌನ್ ಪೊಲೀಸ್ ಠಾಣೆಯಲ್ಲಿ ದೂರು ಸಲ್ಲಿಸಲಾಗಿದೆ. ಅಕ್ರಮ ಶ್ರೀಗಂಧ ಸಾಗಾಣಿಕೆಗೂ ಕ್ಲೇಮುದಾರರಿಗೂ ಸಂಬಂಧವಿರುವುದಿಲ್ಲ. ವಾಹನವನ್ನು ನ್ಯಾಯಾಲಯ ಕೇಳಿದ ಸಂದರ್ಭದಲ್ಲಿ ಹಾಜರುಪಡಿಸಲು ಬದ್ಧರಿರುತ್ತಾರೆ. ನಿಂತಲೆ ನಿಂತು ವಾಹನದ ಬೆಲೆಬಾಳುವ ಉಪಕರಣಗಳು ಹಾಳಾಗುವ ಸಂಭವ ಬರುತ್ತದೆ. ಇದರಿಂದ ಅವರಿಗೆ ತುಂಬಲಾರದ ನಷ್ಟವಾಗುತ್ತದೆ ಎಂದು ತಿಳಿಸುತ್ತಾ ವಾಹನವನ್ನು ಮಧ್ಯಂತರ ಅವಧಿಗೆ ಬಿಟ್ಟುಕೊಡುವಂತೆ ವಿನಂತಿಸಿದ್ದಾರೆ.

ವಾಹನ ಮಾಲೀಕರ ಮಧ್ಯಂತರ ಅವಧಿಯ ಬಿಡುಗಡೆಗೆ ಸಲ್ಲಿಸಿದ ಅರ್ಜಿಯನ್ನು ಅಮೊ.ವಾಹನ.7/94-95, ದಿನಾಂಕ: 19.10.1996 ರಲ್ಲಿ ತಿರಸ್ಕರಿಸಿ ಆದೇಶ ಹೊರಡಿಸಿರುತ್ತದೆ. ಈ ಆದೇಶದ ಮೇಲೆ ವಾಹನ ಮಾಲೀಕರು ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಶಿವಮೊಗ್ಗದಲ್ಲಿ ಕ್ರಿ.ಮಿ.ಅ.ನಂ. 65/96 ರಲ್ಲಿ ಮೇಲ್ಮನವಿ ಹೋಗಿರುತ್ತಾರೆ. ದಿನಾಂಕ: 14.2..2002 ರಲ್ಲಿ ತೀರ್ಪು ನೀಡಿ ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಸಾಗರ ವಿಭಾಗ, ಸಾಗರ ಇವರು ದಿನಾಂಕ: 19.10.1996ರ ಆದೇಶವನ್ನು ತಿರಸ್ಕರಿಸಿ ಮೂಲ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಮುಂದಿನ ವಿಚಾರಣೆಗೆ ಕಳುಹಿಸಿಕೊಟ್ಟಿರುತ್ತಾರೆ. ಈ ಪ್ರಕರಣದ ವಿಚಾರಣೆಗೆ ದಿನಾಂಕ: 20.4.2002 ರಲ್ಲಿ ಹಾಜರಾಗಲು ದಿನಾಂಕ: 26.3.2002 ರಂದು ನೋಂದಣಿ ಅಂಚೆ ಮೂಲಕ ವಾಹನ ಮಾಲೀಕರಿಗೆ ಕಳುಹಿಸಿದ ಸಮನ್ಸಿನ ಲಕೋಟೆ ಮೇಲೆ ನಾಟ್ ಕ್ಲೇಮ್ ಎಂದು ಅಂಚೆ ಇಲಾಖೆಯವರು ನಮೂದಿಸಿ ನ್ಯಾಯಾಲಯಕ್ಕೆ ಹಿಂದಿರುಗಿಸಿರುತ್ತಾರೆ. ಇದೇ ರೀತಿ ದಿನಾಂಕ: 22.4.2002, 28.8.2002, 7.3.2003 ರಲ್ಲಿ ಕಳುಹಿಸಿದ ಲಕೋಟೆ ಮೇಲು ನಾಟ್ ಕ್ಲೇಮ್ ಎಂದು ಅಂಚೆ ಇಲಾಖೆಯವರು ನಮೂದಿಸಿ ಹಿಂದಿರುಗಿಸಿರುತ್ತಾರೆ. ಅಲ್ಲದೆ ಬಾಧ್ಯತೆದಾರ ಪರ ಮಾನ್ಯ ಶ್ರೀ ಪಿ.ಎನ್. ರಂಗನಾಥ, ವಕೀಲರು ವಾದ ಮಾಡಲು ಆಗುವುದಿಲ್ಲವೆಂದು ದಿನಾಂಕ: 17.8.2002 ರಲ್ಲಿ ಈ ನ್ಯಾಯಾಲಯಕ್ಕೆ ಮೆಮೋ ಸಲ್ಲಿಸಿ ಹಿಂದೆ ಸರಿದಿರುತ್ತಾರೆ. ಈ ವಿಷಯದ ಬಗ್ಗೆ ಪುನಃ ಭಾಧ್ಯತೆದಾರರಿಗೆ ದಿನಾಂಕ: 29.9.2003 ನೋಟೀಸ್ ಜಾರಿ ಮಾಡಿ ದಿನಾಂಕ: 25.10.2003ಕ್ಕೆ ಬೆಳಿಗ್ಗೆ 11.00 ಗಂಟೆಗೆ ಹಾಜರಾಗಲು ತಿಳಿಸಿದ್ದು ನೋಟೀಸ್ ಜಾರಿಯಾಗಿ ಸ್ವೀಕೃತಿ ಈ ನ್ಯಾಯಾಲಯಕ್ಕೆ ತಲುಪಿರುತ್ತದೆ. ಈ ಪ್ರಕರಣದಲ್ಲಿ ಬಹಳಷ್ಟು ಕಾಲವಕಾಶ ನೀಡಿದ್ದರು ಬಾಧ್ಯತೆದಾರರ ವಿಚಾರಣೆಗೆ ಹಾಜರಾಗದೆ ಇರೋದು ನೋಡಿದರೆ ಈ ವಿಚಾರಣೆಯಲ್ಲಿ ಭಾಗವಹಿಸಲು ಆಸಕ್ತಿ ಇಲ್ಲವೆಂದು ಕಂಡು ಬಂದಿದೆ. ಅಲ್ಲದೆ ಈ ಪ್ರಕರಣದಲ್ಲಿ ಬಾಧ್ಯತೆದಾರರು ವಿಚಾರಣೆಗೆ ಹಾಜರಾಗದೆ ಇದ್ದುದರಿಂದ ಡಿಫೆನ್ಸ್ ಸಾಕ್ಷಿ ಹೇಳಿಕೆ ಏನು ಇಲ್ಲವೆಂದು ತೀರ್ಮಾನಿಸಲಾಯಿತು.

ಈ ವಾಹನವು ಅರಣ್ಯ ಉತ್ಪನ್ನ ಅಕ್ರಮ ಸಾಗಾಣಿಕೆಯಲ್ಲಿ ತೊಡಗಿಲ್ಲವೆಂದು ಸಾಬೀತುಪಡಿಸಲು ಬಾಧ್ಯತೆದಾರರು ಸಂಪೂರ್ಣ ವಿಫಲರಾಗಿರುತ್ತಾರೆ. ಆದ್ದರಿಂದ ಮೇಲೆ ಎಲ್ಲಾ ದಾಖಲೆ ಹೇಳಿಕೆ ವಾದವನ್ನು ಪರಿಶೀಲಿಸಿ ನನಗೆ ಈ ಕೆಳಗಿನ ಅಂಶಗಳು ಕಂಡು ಬಂದಿರುತ್ತದೆ.

1. ಈ ವಾಹನ ಅರಣ್ಯ ಉತ್ಪನ್ನ ಸಾಗಾಣಿಕೆಗೆ ತೊಡಗಿಸಲಾಗಿದೆ.

2. ಈ ವಾಹನವನ್ನು ಕಳ್ಳ ಸಾಗಾಣಿಕೆಯ ಪ್ರಕರಣದಲ್ಲಿ ವಾಹನ ಮಾಲೀಕರು ನೇರವಾಗಿ ಶ್ಯಾಮೀಲಾಗಿರುವುದಿಲ್ಲ. ಆದರೆ ಈ ಕಳ್ಳಸಾಗಾಣಿಕೆ ಅವರ ತಿಳುವಳಿಕೆ ಇಲ್ಲದೆ ಆಗಿದೆ ಎಂದು ಸಾಬೀತುಪಡಿಸಲು ವಾಹನ ಮಾಲೀಕರು ವಿಫಲರಾಗಿರುತ್ತಾರೆ.

3. ವಾಹನ ಮಾಲೀಕರು ತಮ್ಮ ವಾಹನವನ್ನು ಕಳ್ಳ ಸಾಗಾಣಿಕೆ ಯಾರು ಉಪಯೋಗ ಮಾಡಬಾರದು ಎಂದು ಮುನ್ನೆಚ್ಚರಿಕೆ ತೆಗೆದುಕೊಂಡಿರುವುದಿಲ್ಲವೆಂದು ಕಂಡು ಬಂದಿರುತ್ತದೆ. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದ್ದೇನೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯನ್ನು ಗಣನೆಗೆ ತೆಗೆದುಕೊಂಡು ಶ್ರೀ ಶಿವರಾಜ್ ಸಿಂಗ್, ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963, 71(ಎ) ರಿಂದ ಜಿ ಪ್ರಕಾರ ವಲಯ ಅರಣ್ಯಾಧಿಕಾರಿ ಸಾಗರ ಇವರು ಜಪ್ತು ಮಾಡಿದ ವಾಹನ ಲಾರಿ ನಂ. ಕೆಎ 23 4393ನ್ನು ಚಾಸ್ಸಿಸ್ ನಂ. ಇವೈಹೆಚ್ 40 ಎ 21090 ಎಫ್ 10410 ಎಂಜಿನ್ ನಂ. ಎಸ್‌ಡಿ 25 ಎಫ್‌ಸಿಬಿ 9463 ಅನ್ನು ಮತ್ತು ಅದರಲ್ಲಿದ್ದ 1350 ಕೆಜಿ ಶ್ರೀಗಂಧ ಮತ್ತು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಿದ್ದೇನೆ. ಈ ಆದೇಶವನ್ನು ತೆರೆದ ನ್ಯಾಯಾಲಯದಲ್ಲಿ ಉಕ್ತ ಲೇಖನ ಹೇಳಿ, ಗಣಕ ಯಂತ್ರದಲ್ಲಿ ಮುದ್ರಿಸಿ ಸರಿಪಡಿಸಿ ದಿನಾಂಕ: 22.11.2003 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ಹೊರಡಿಸಿದೆ. ಈ ಆದೇಶ ಹೊರಡಿಸಿದ 30 ದಿನದೊಳಗೆ ಯಾರು ಮೇಲ್ಮನವಿ ಇದ್ದಲ್ಲಿ ಇದೇ ಅಂತಿಮ ಆದೇಶವೆಂದು ಪರಿಗಣಿಸಲಾಗುವುದು.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 1342

**ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಅಂಕೋಲಾ**

**ಅಧಿಸೂಚನೆ ಸಂಖ್ಯೆ: ತಾಸಕಅ:ಎಸ್-1:ಸಿಬ್ಬಂದಿ:ಸಿಆರ್-53:2003-04, ದಿನಾಂಕ: 19ನೇ ನವೆಂಬರ್ 2003**

**ವಿಷಯ:** ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ - 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ:56:ಯೋಮಸ-02(1) ದಿನಾಂಕ: 18.07.2002.
2. ಆಯುಕ್ತರು ಸಮಾಜ ಕಲ್ಯಾಣ ಇಲಾಖೆ : ಅ.ಸ.ಪ. ಸಂಖ್ಯೆ: ಸಕವಿ:ವಿಘಯೋ:ಕುಂಕೊ:ಕಅ:ಸಿಆರ್-4: 2002-03, ದಿನಾಂಕ: 21.8.2003.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಗಳು ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ತಾಲ್ಲೂಕು ಮಟ್ಟದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| **ಸಕ್ಷಮ ಪ್ರಾಧಿಕಾರ** | **ಅಪೀಲು ಪ್ರಾಧಿಕಾರ** |
|---|---|
| ತಾಲ್ಲೂಕು ಮಟ್ಟದಲ್ಲಿ ಕಛೇರಿ ಅಧೀಕ್ಷಕರು | ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು |

ಸರ್ಕಾರದ ಅಧಿನಿಯಮದ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ ಈ ಕೆಳಗೆ ತಿಳಿಸಿರುವ 4 ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1) ಇಲಾಖೆಯ ಸಂಘಟನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು**

ತಾಲ್ಲೂಕು ಹಂತದಲ್ಲಿ ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯು ತಾಲ್ಲೂಕು ಪಂಚಾಯತ್ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ತಾಲ್ಲೂಕಾ ಸಮಾಜ ಕಲ್ಯಾಣಾಧಿಕಾರಿಗಳು ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಸದರಿ ಕಛೇರಿಯಲ್ಲಿ ಈ ಕೆಳಗಿನಂತೆ ಪೂರಕ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

| | | |
|---|---|---|
| 1) | ಕಛೇರಿ ಅಧೀಕ್ಷಕರು | 1 ಹುದ್ದೆ |
| 2) | ಪ್ರಥಮ ದರ್ಜೆ ಸಹಾಯಕರು | 1 ಹುದ್ದೆ |
| 3) | ದ್ವಿತೀಯ ದರ್ಜೆ ಸಹಾಯಕರು | 1 ಹುದ್ದೆ |
| 4) | ಬೆರಳಚ್ಚುಗಾರರು | 1 ಹುದ್ದೆ |
| 5) | ಗ್ರೂಪ್ 'ಡಿ' ನೌಕರರು | 1 ಹುದ್ದೆ |

ನಮ್ಮ ಅಧೀನದಡಿಯಲ್ಲಿ ಬರುವ ಎಲ್ಲ ಸಂಸ್ಥೆಗಳ ಹೆಸರು ಮತ್ತು ವಿವರಗಳು:

| ಕ.ಸ. | ಸಂಸ್ಥೆಯ ಹೆಸರು | ಸಂಖ್ಯೆ | ಸಿಬ್ಬಂದಿ | ವಿದ್ಯಾರ್ಥಿಗಳ ಮಂಜೂರಾತಿ ಸಂಖ್ಯೆ |
|---|---|---|---|---|
| 1. | ಮೆಟ್ರಿಕ್ ಪೂರ್ವ ಗಂಡು ಮಕ್ಕಳ ವಸತಿ ನಿಲಯ | 1 | 04 | 50 |
| 2. | ಮೆಟ್ರಿಕ್ ಪೂರ್ವ ಹೆಣ್ಣು ಮಕ್ಕಳ ವಸತಿ ನಿಲಯ | 1 | 05 | 50 |
| 3. | ಸ.ಪ. ಗಾಂವಕರ ಸ್ಮಾರಕ ಅನುದಾನಿತ ವಸತಿ ನಿಲಯ | 1 | - | 25 |
| 4. | ಹೊಲಿಗೆ ತರಬೇತಿ ಕೇಂದ್ರ | 1 | 01 | 20 |
| 5. | ಮಹಿಳಾ ಮತ್ತು ಶಿಶು ಕಲ್ಯಾಣ ಕೇಂದ್ರ | 1 | 02 | 50 |

1. ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ತಾಲ್ಲೂಕಾ ಮಟ್ಟದಲ್ಲಿ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1) ಹೊಲಿಗೆ ಯಂತ್ರಗಳ ಸರಬರಾಜು
2) ಕಾನೂನು ಪಧವೀಧರರಿಗೆ ಧನ ಸಹಾಯ
3) ನರ್ಸರಿ ಮತ್ತು ಮಹಿಳಾ ಕಲ್ಯಾಣ ಕೇಂದ್ರಗಳು
4) ಕಟ್ಟಡಗಳ ನಿರ್ವಹಣೆ
5) ಮೆಟ್ರಿಕ್ ನಂತರದ ರಾಜ್ಯ ಸರ್ಕಾರದ ಶಿಷ್ಯವೇತನ
6) ಎಸ್.ಎಸ್.ಎಲ್.ಸಿ. ಪ್ರಥಮ ಪ್ರಯತ್ನಕ್ಕೆ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಪುರಸ್ಕಾರ ಬಹುಮಾನ.
7) ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ
8) ಪ್ರತಿಭಾ ವಿದ್ಯಾರ್ಥಿ ವೇತನ
9) ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳು
10) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಮೆಟ್ರಿಕ್ ನಂತರದ ಭಾರತ ಸರ್ಕಾರದ ವಿದ್ಯಾರ್ಥಿವೇತನ (ಸಿಎಸ್‌ಎಸ್)
11) ಅನೈರ್ಮಲ್ಯ ವೃತ್ತಿಯಲ್ಲಿ ತೊಡಗಿರುವ ಮಕ್ಕಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ
12) 1 ರಿಂದ 4ನೇ ತರಗತಿಯ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ.
13) ಅಸ್ಪೃಶ್ಯತಾ ನಿವಾರಣೆ
14) ದೌರ್ಜನ್ಯಕ್ಕೆ ಒಳಪಟ್ಟ ಪರಿಶಿಷ್ಟ ಜಾತಿಯವರಿಗೆ ಪರಿಹಾರ
15) ಜಾತಿ ಪರಿಶೀಲನೆ

2. **ಅಧಿಕಾರಿಗಳ ಕರ್ತವ್ಯಗಳು:**

1) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಸರ್ವಾಂಗೀಣ ಅಭಿವೃದ್ಧಿಗಾಗಿ ತಾಲ್ಲೂಕು ಮಟ್ಟದ ಅನುಷ್ಠಾನ ಅಧಿಕಾರಿಗಳಾಗಿರುತ್ತಾರೆ.
2) ತಿಂಗಳಲ್ಲಿ 15 ದಿವಸ ಪ್ರವಾಸ 10 ರಾತ್ರಿ ವಸತಿ ಮಾಡುವುದು. ಪರಿಶಿಷ್ಟ ಜಾತಿ ಕಾಲೋನಿಗಳಿಗೆ ವಿಶೇಷವಾಗಿ ಭೇಟಿ ನೀಡುವುದು.
3) ವಿವರವಾದ ವಾರ್ಷಿಕ ಕ್ರಿಯಾ ಯೋಜನೆ ತಯಾರಿಸಿ ಅನುದಾನ ಮಂಜೂರಿಗೆ ಮೇಲಾಧಿಕಾರಿಗೆ ಕಳುಹಿಸುವುದು.
4) ಇಲಾಖಾ ಸಂಸ್ಥೆಗಳ ಹಾಗೂ ಜಿ.ಐ.ಎ. ಹಾಸ್ಟೆಲ್ ಮೇಲ್ವಿಚಾರಣೆ ಹಾಗೂ ಕಛೇರಿ ಸಿಬ್ಬಂದಿಗಳ ಟೇಬಲ್ ಇನ್ಸ್‌ಪೆಕ್ಷನ್ ಮಾಡುವುದು.
5) ಮಾಸಿಕ ತ್ರೈಮಾಸಿಕ, ಅರ್ಧವಾರ್ಷಿಕ, ವಾರ್ಷಿಕ ಪ್ರಗತಿ ವರದಿ ಓಕಲ್‌ವೈಜ್ ಮಾಸಿಕ ಖರ್ಚಿನ ಪತ್ರಿಕೆ, ಮಾಸಿಕ ಚೆಕ್ಕು, ಲೆಕ್ಕಪತ್ರ ಕಳುಹಿಸುವುದು.
6) ಶಾಲೆಗೆ ಹೋಗುವ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಮಕ್ಕಳ ಅಂಕಿ ಸಂಖ್ಯೆ ನಿರ್ವಹಿಸುವುದು.
7) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗ ವಿದ್ಯಾರ್ಥಿಗಳಿಗೆ ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ ಮಂಜೂರು ಮಾಡುವುದು. ಆ ಬಗ್ಗೆ ಲೆಕ್ಕ ಪತ್ರ ಬಟವಾಡೆ ಯಾದಿಗಳನ್ನು ನಿರ್ವಹಿಸುವುದು.
8) ಎಸ್.ಎಸ್.ಎಲ್.ಸಿ. ಪರೀಕ್ಷೆಯನ್ನು ಪ್ರಥಮ ಪ್ರಯತ್ನಕ್ಕೆ ಪ್ರಥಮ ಶ್ರೇಣಿಯಲ್ಲಿ ಪಾಸಾದವರಿಗೆ ಉತ್ತೇಜಕ ಬಹುಮಾನ ಮಂಜೂರು ಮಾಡುವುದು.
9) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ಶಾಲೆಗೆ ಹೋಗುವ ಮಕ್ಕಳಿಗೆ ಉಚಿತವಾಗಿ ಸಮವಸ್ತ್ರ, ಪಠ್ಯ ಪುಸ್ತಕ ಮತ್ತು ಇತರೇ ಶೈಕ್ಷಣಿಕ ಸಹಾಯಗಳನ್ನು ಉಚಿತವಾಗಿ ಒದಗಿಸುತ್ತಿರುವ ಬಗ್ಗೆ ಖಚಿತಪಡಿಸಿಕೊಳ್ಳುವುದು.
10) ಪರಿಶಿಷ್ಟ ಜಾತಿ ಕಾಲೋನಿಗಳಲ್ಲಿ ಕಾರ್ಯಕ್ರಮ ಪ್ರಾರಂಭಿಸಲು ವಯಸ್ಕರ ಶಿಕ್ಷಣ ಯುವಜನ ಸೇವೆ ಮತ್ತು ಸಹಕಾರ ಮುಂತಾದ ಇಲಾಖೆಗಳೊಂದಿಗೆ ಸಹಕರಿಸುವುದು.
11) ವಸತಿ ನಿಲಯ ಕಟ್ಟಡಗಳ ನಿರ್ಮಾಣ, ಸಮುದಾಯ ಕೇಂದ್ರ ಮುಂತಾದವುಗಳ ಮೇಲ್ವಿಚಾರಣೆ ಮಾಡುವುದು.
12) ವಿವಿಧ ವಸತಿ ಯೋಜನೆಗಳನ್ನು ಅನುಷ್ಠಾನಗೊಳಿಸುವ ಇಲಾಖೆಗಳಿಗೆ ಅರ್ಹ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗ ಫಲಾನುಭವಿಗಳನ್ನು ಗುರುತಿಸಲು ಸಹಕರಿಸುವುದು.
13) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗಗಳ ದೌರ್ಜನ್ಯ ಪ್ರಕರಣಗಳಲ್ಲಿ ನಾಗರೀಕ ಹಕ್ಕು ಸಂರಕ್ಷಣಾ ಘಟಕದೊಂದಿಗೆ ಸಹಕರಿಸುವುದು ಮತ್ತು ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗ ಹಿತರಕ್ಷಣೆಯ ತಾಲ್ಲೂಕು ಮಟ್ಟದ ಸಮಿತಿಗೆ ಸದಸ್ಯ ಕಾರ್ಯದರ್ಶಿಯಾಗಿರುವುದು.
14) ಬೆಂಕಿ ಆಕಸ್ಮಿಕ ಮುಂತಾದ ನೈಸರ್ಗಿಕ ವಿಪತ್ತುಗಳಿಗೆ ಸಹಾಯಧನ ಒದಗಿಸಲು ಕ್ರಮ ತೆಗೆದುಕೊಳ್ಳುವುದು.
15) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದ ನಿವೇಶನ ರಹಿತರಿಗೆ ನಿವೇಶನ ಮತ್ತು ಸ್ಮಶಾನ ಭೂಮಿಯನ್ನು ಒದಗಿಸುವ ಸಲುವಾಗಿ ಭೂ ಸ್ವಾಧೀನದ ಬಗ್ಗೆ ಸಂಬಂಧಪಟ್ಟವರಿಗೆ ಕ್ರಮ ತೆಗೆದುಕೊಳ್ಳಲು ತಿಳಿಸುವುದು.
16) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗ ಕೃಷಿ ಕಾಲೋನಿಗಳಲ್ಲಿ ತೋಟ ಕೈಗಾರಿಕೆ ಸಹಕಾರ ಸಂಘಗಳನ್ನು ಸ್ಥಾಪಿಸಿ ಅವರ ಅಭಿವೃದ್ಧಿಗೆ ಕ್ರಮ ತೆಗೆದುಕೊಳ್ಳುವುದು.

17) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗದವರ ಸಾಮಾಜಿಕ, ಆರ್ಥಿಕ ಸರ್ವೆ ನಡೆಸಿ ಎಸ್‌ಸಿಪಿ:ಐಆರ್‌ಡಿಪಿ:ಟಿಎಸ್‌ಪಿ:ತಾಳಿಭಾಗ್ಯ: ಗಂಗಾಕಲ್ಯಾಣ:ಭಾಗ್ಯಜ್ಯೋತಿ:ನೇಗಿಲುಭಾಗ್ಯ ಮುಂತಾದ ಕಾಯಕ್ರಮಗಳನ್ನು ಅನುಷ್ಠಾನಗೊಳಿಸಲು ಫಲಾನುಭವಿಗಳನ್ನು ಗುರುತಿಸುವುದು.
18) ಜೀತದಾಳುಗಳನ್ನು ಗುರುತಿಸಿ, ಬಿಡುಗಡೆಗೊಳಿಸಿ ಪುನರ್‌ವಸತಿ ಕಲ್ಪಿಸಲು ಕ್ರಮ ತೆಗೆದುಕೊಳ್ಳುವುದು.
19) ಸ್ಥಳೀಯ ಸಂಸ್ಥೆಗಳ ಶೇಕಡಾ 18ರ ಅನುದಾನ ವಿತರಣೆ ಬಗ್ಗೆ ಪರಿಶೀಲಿಸುವುದು.
20) ಅಂತರ್‌ಜಾತಿ ವಿವಾಹಿತ ದಂಪತಿಗಳಿಗೆ ಸಹಾಯಧನ ಮಂಜೂರಿಗೆ ಕ್ರಮ ತೆಗೆದುಕೊಳ್ಳುವುದು.
21) ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗ ಕಾಲೋನಿಗಳಿಗೆ ಮತ್ತು ವಾಸದ ಮನೆಗಳಿಗೆ ಕುಡಿಯುವ ನೀರು ವಿದ್ಯುತ್ ಒದಗಿಸುವ ಬಗ್ಗೆ ಸರ್ವೆ ನಡೆಸುವುದು.
22) ವೃದ್ಧಾಪ್ಯ ವೇತನ, ವಿಧವಾ ವೇತನ, ಗರ್ಭಿಣಿ ಸ್ತ್ರೀಯರಿಗೆ ಸಹಾಯ, ಅಂಗವಿಕಲ ವೇತನ ಮುಂತಾದವುಗಳ ಬಗ್ಗೆ ಅರ್ಹ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗ ಫಲಾನುಭವಿಗಳನ್ನು ಗುರುತಿಸಿ ಮಂಜೂರಿ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳಿಗೆ ಸಂಪರ್ಕಿಸುವುದು.
23) ಸರ್ಕಾರಿ, ಅರೆ ಸರಕಾರಿ, ಸ್ಥಳೀಯ ಸಂಸ್ಥೆಗಳು ನೇಮಕಾತಿಯಲ್ಲಿ ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗ ಮೀಸಲಾತಿಯನ್ನು ಸರಕಾರಿ ಆದೇಶದಂತೆ ಅನುಷ್ಠಾನಗೊಳಿಸುವುದನ್ನು ಪರಿಶೀಲಿಸಿ ವರದಿಯನ್ನು ಕಳುಹಿಸುವುದು.
24) ಸಹಕಾರ ಸಂಘ, ಸೇವಾ ಸಂಘ, ಮಹಿಳಾ ಮಂಡಳಿ ಮುಂತಾದುವುಗಳಲ್ಲಿ ಸದಸ್ಯರಾಗಲು ಪ್ರೋತ್ಸಾಹಿಸುವುದು.
25) ಜಿಲ್ಲಾ ಮತ್ತು ರಾಜ್ಯ ಮಟ್ಟದ ಅಧಿಕಾರಿಗಳು ವಹಿಸಿದ ಯಾವುದೇ ಕೆಲಸ ನಿರ್ವಹಿಸುವುದು.

3. **ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು:**

ಕಛೇರಿ ಸಿಬ್ಬಂದಿ ವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಆಯಾ ಅಧಿಕಾರಿಗಳಿಗೆ ಪೂರಕವಾಗಿ ಸಹಾಯವಾಗುವಂತೆ ಕಾರ್ಯ ನಿರ್ವಹಿಸುವುದು. ಸಾರ್ವಜನಿಕರಿಂದ ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿದ ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರು ಸಹಿ ಮಾಡಿಸಿದ ನಂತರ ಸದರಿ ಪತ್ರಗಳನ್ನು ನೋಂದಾಯಿಸಿ ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು; ಕಛೇರಿ ಕೈಪಿಡಿಯ ಪ್ರಕಾರ ಕಡತವನ್ನು ಪ್ರಾರಂಭಿಸಿ ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮ ಕೈಗೊಳ್ಳುವುದು.

4. **ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು:**

1) ಕಛೇರಿಯಲ್ಲಿ ಸ್ವೀಕರಿಸಲಾಗುವ ಎಲ್ಲ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೋಂದಾಯಿಸಿ ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
2) ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಮಾಸಿಕ ಸಭೆಗಳನ್ನು ಏರ್ಪಡಿಸುವುದು.
3) ಆಗಿಂದಾಗ್ಗೆ ಅಧಿಕಾರಿಗಳಿಂದ ಹಾಗೂ ಕಛೇರಿ ಅಧೀಕ್ಷಕರಿಂದ ವಿಷಯ ನಿರ್ವಾಹಕ ಮೇಜು ತಪಾಸಣೆ ಕಾರ್ಯ.
4) ಇಲಾಖಾ ವರ್ಗದ ಸಿಬ್ಬಂದಿಯವರೆ ಕಾರ್ಯಾಗಾರ ನಡೆಸುವುದು.
5) ಸರಕಾರವು ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತ ರೀತಿಯಲ್ಲಿ ಪಾಲಿಸುವುದು.
6) ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಯ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾಹಿತಿ ನೀಡುವುದು.

5. **ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು:**

1) ಇಲಾಖೆಯ ಕಾರ್ಯಕ್ರಮ ಹಾಗೂ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿಗಳು, ಆದೇಶಗಳು, ವಾರ್ಷಿಕ ಸಂಕಲನ ಕ್ರಿಯಾ ಯೋಜನೆ ಹಾಗೂ ಕಿರು ಹೊತ್ತಿಗೆಗಳನ್ನು ಸಾರ್ವಜನಿಕರ ಪ್ರಕಟಣೆಗಾಗಿ ನೀಡುವುದು.
2) ಸಾರ್ವಜನಿಕ ಕುಂದುಕೊರತೆಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಸಂಪರ್ಕ ಅಧಿಕಾರಿಗಳನ್ನು ನೇಮಿಸಿರುವುದು.
3) ತಾಲ್ಲೂಕಾ ಮಟ್ಟದಲ್ಲಿ ಕಛೇರಿ ಅಧೀಕ್ಷಕರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ತಾಲ್ಲೂಕಾ ಸಮಾಜ ಕಲ್ಯಾಣಾಧಿಕಾರಿಗಳನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ಸೇರಿಸಲಾಗಿದೆ.
4) ಇಲಾಖೆಯಲ್ಲಿ ಮಂಜೂರಾತಿಗಾಗಿ ನೀಡಲಾಗಿರುವ ಕಾಲಾವಧಿ ನಿಗದಿ, ವಿಚಾರಗಳನ್ನು ಸಾರ್ವಜನಿಕರಿಗೆ ತಿಳಿಸುವಂತಹ ಕಾರ್ಯಪಟ್ಟಿ ಮಾಡಿ ಪ್ರಕಟಿಸಿದೆ.

ತಾಲ್ಲೂಕಾ ಸಮಾಜ ಕಲ್ಯಾಣ ಅಧಿಕಾರಿಗಳು,
ಪಿ.ಆರ್. 1343 ಅಂಕೋಲಾ. (ಉ.ಕ.)

**ಗೌರವಾನ್ವಿತ 11ನೇ ಎ.ಸಿ.ಎಮ್.ಎಮ್ ನ್ಯಾಯಾಲಯಕ್ಕೆ, ಬೆಂಗಳೂರು ನಗರ**

**ವಿಷಯ:** ಹೆಣ್ಣೂರು ಪೊಲೀಸ್ ಠಾಣೆಯಲ್ಲಿ ಅಮಾನತ್ತುಪಡಿಸಿರುವ ವಾರಸುದಾರರು ಇಲ್ಲದ ಈ ಕೆಳಕಂಡ ಮಾಲುಗಳನ್ನು ಹರಾಜು ಮಾಡುವ ಬಗ್ಗೆ.

ಮೇಲ್ಕಂಡ ವಿಷಯಕ್ಕೆ ಸಂಬಂಧಪಟ್ಟಂತೆ ಘನ ನ್ಯಾಯಾಲಯದಲ್ಲಿ ನಿವೇದಿಸಿಕೊಳ್ಳುವುದೇನೆಂದರೆ ಹೆಣ್ಣೂರು ಪೊಲೀಸ್ ಠಾಣೆಯಲ್ಲಿ ಅಮಾನತ್ತುಪಡಿಸಿರುವ ಈ ಕೆಳಕಂಡ ವಾಹನ ಮತ್ತು ಮಾಲುಗಳಿಗೆ ವಾರಸುದಾರರು ಯಾರು ಇರುವುದಿಲ್ಲ. ವಾರಸುದಾರರ ಪತ್ತೆಗಾಗಿ ಬೆಂಗಳೂರು ನಗರದ ಎಲ್ಲ ಪೊಲೀಸ್ ಠಾಣೆಗೆ ಸುತ್ತೋಲೆಯನ್ನು ಕಳುಹಿಸಿಕೊಟ್ಟಿದ್ದು ಇಲ್ಲಿಯ ತನಕ ವಾರಸುದಾರರು ಪತ್ತೆಯಾಗಿರುವುದಿಲ್ಲ. ಈ ಕೆಳಕಂಡ ಅಮಾನತ್ತುಪಡಿಸಿದ ಮಾಲುಗಳು ಮತ್ತು ವಾಹನಗಳು 1996 ರಿಂದಲೂ ವಾರಸುದಾರರಿಲ್ಲದೆ

ಉಳಿದುಕೊಂಡಿದ್ದು ಸದರೀ ಮಾಲುಗಳನ್ನು ಸಾರ್ವಜನಿಕವಾಗಿ ಹರಾಜು ಮಾಡಲು ಅನುಮತಿ ನೀಡಬೇಕಾಗಿ ಘನ ನ್ಯಾಯಾಲಯದಲ್ಲಿ ಕೋರಿದೆ. ಇದರೊಂದಿಗೆ ಸುತ್ತೋಲೆಯ ಯಾಥ ಪ್ರತಿ ಮತ್ತು ಹರಾಜು ಮಾಡಬೇಕಾಗಿರುವ ಮಾಲಿನ ಪಟ್ಟಿಯನ್ನು ಲಗತ್ತಿಸಿರುತ್ತೆ.

ಅಮಾನತ್ತುಪಡಿಸಿರುವ ಮಾಲುಗಳ ವಿವರ ಈ ಕೆಳಕಂಡಂತೆ ಇರುತ್ತೆ.

| ಕ್ರ.ಸಂ. | ಮೊ.ಸಂ. ಮತ್ತು ಕಲಂ | ಮಾಲುಪಟ್ಟಿ ಸಂಖ್ಯೆ | ಮಾಲುಗಳ ವಿವರ |
|---|---|---|---|
| 1 | 2 | 3 | 4 |
| 1. | 232/96 ಕಲಂ 379 ಐಪಿಸಿ | 88/96 | ಒಂದು ಬ್ಯಾಟರಿ |
| 2. | 232/96 ಕಲಂ 379 ಐಪಿಸಿ | 89/96 | ಒಂದು ಕಾರಿನ ಚಕ್ರ |
| 3. | 232/96 ಕಲಂ 379 ಐಪಿಸಿ | 90/96 | ಎರಡು ಸ್ಕೂಟರಿನ ಚಕ್ರಗಳು |
| 4. | 239/96 ಕಲಂ 380 ಐಪಿಸಿ | 102/96 | ಒಂದು ಯುನಿಟೋನ್ ಟೇಪ್ ರೆಕಾರ್ಡರ್ |
| 5. | 06/97 ಕಲಂ 379 ಐಪಿಸಿ | 8/97 | ಒಂದು ಟಿ.ವಿ.ಎಸ್.50 ಮೊಪೆಡ್ ಸಿ.ಎ.ಎನ್-02<br>ಚಾಸಿಸ್ ನಂ.404759-03-86.<br>ಇಂಜಿನ್ ನಂ.23525-11-86. |
| 6. | 88/97 ಕಲಂ 457-380 ಐಪಿಸಿ | 29/97 | ಬಿ.ಪಿ.ಎಕ್ಸ್ಸ್ಯಾನಿಯೊ ಟ್ವಿನ್ ಒನ್ ಟೆಪ್‌ರೆಕಾರ್ಡರ್. |
| 7. | 183/97 ಕಲಂ 457,380 ಐಪಿಸಿ | 63/97 | ವಿಡಿಯೊಕಾನ್ ಟ್ವಿನ್.ಒನ್ ಟೆಪ್‌ರೆಕಾರ್ಡರ್ |
| 8. | 183/97 ಕಲಂ 457,380 ಐಪಿಸಿ | 64/97 | 1. ಒಂದು ಟೆಲಿ ಎಂಬ ಚಿಕ್ಕ ಟಿವಿ.<br>2. ಒಂದು ಸೂಟ್‌ಕೇಸ್.<br>3. ಕೆಂಪು ಬಣ್ಣದ ರೇಷ್ಮೆ ಸೀರೆ.<br>4. ವಿವಿಧ ಬಣ್ಣದ ಪಾಲಿಸ್ಟರ್ ಸೀರೆಗಳು |
| 9. | 183/97 ಕಲಂ 457,380 ಐಪಿಸಿ | 65/97 | 1. ಒಂದು ಸೂಟ್‌ಕೇಸ್<br>2. 9 ಜೊತೆ ವಿವಿಧ ಬಣ್ಣದ ಚೂಡಿದಾರ ಡ್ರೆಸ್‌ಗಳು<br>3. ಎರಡು ನೈಟಿಗಳು<br>4. 4 ಮಿಡಿಗಳು<br>5. 2 ಹ್ಯಾಂಡ್ ಬ್ಯಾಗ್‌ಗಳು. |
| 10. | 89/98 ಕಲಂ 379 ಐಪಿಸಿ | 76/98 | 1. ಒಂದು ರೇಂಜರ್ ಸೈಕಲ್.<br>2. ಒಂದು ರೇಂಜರ್ ಸೈಕಲ್<br>3. ಒಂದು ರೇಂಜರ್ ಸೈಕಲ್. |
| 11. | 213/97 ಕಲಂ 457,380 ಐಪಿಸಿ. | 98/97 | ಒಂದು ಚಿನ್ನದ ಚೈನು ತೂಕ 24.200 ಗ್ರಾಂ. |
| 12. | 213/97 ಕಲಂ 457,380 ಐಪಿಸಿ | 100/97 | ಒಂದು ಹೆಚ್.ಎಂ.ಟಿ. ಕೈಗಡಿಯಾರ |
| 13. | 213/97 ಕಲಂ 457,380 ಐಪಿಸಿ | 105/97 | ಫಿಲಿಫ್ಸ್ ಟು ಇನ್ ಒನ್ ಟೆಪ್‌ರೆಕಾರ್ಡರ್ |
| 14. | 218/01 ಕಲಂ 379 ಐಪಿಸಿ | 88/01 | 1. ಎರಡು ಕಬ್ಬಿಣದ ಜಂ ಪ್ಲೇಟುಗಳು.<br>2. ಎರಡು ಕಬ್ಬಿಣದ ಡಂಬಲ್ಸ್‌ಗಳು. |
| 15. | 30/02 ಕಲಂ 457,380 ಐಪಿಸಿ | 13/02 | 1. ಪ್ಯಾನಸೋನಿಕ್ ಟು ಇನ್ ಒನ್ ಟೆಪ್‌ರೆಕಾರ್ಡರ್<br>2. ನ್ಯಾಷನಲ್ ಟು ಇನ್ ಒನ್ ಟೆಪ್‌ರೆಕಾರ್ಡರ್.<br>3. ಸಮುರಾಯ್ ಮಿಕ್ಸಿ.<br>4. ಹಳೆಯ ಇಸ್ತ್ರಿ ಪೆಟ್ಟಿಗೆ.<br>5. ಮಕ್ಕಳ ಒಂದು ಚಿನ್ನದ ಉಂಗುರ ತೂಕ 1500 ಮಿ.ಗ್ರಾಮ್. |
| 16. | 30/02 ಕಲಂ 457,380 ಐಪಿಸಿ | 14/02 | ಚಿನ್ನದ ಚೈನು ತೂಕ 0.4 ಗ್ರಾಮ್. |
| 17. | 30/02 ಕಲಂ 457,380 ಐಪಿಸಿ | 17/02 | 1. ಒಂದು ಜೊತೆ ಚಿನ್ನದ ಕಿವಿಯೊಲೆ ತೂಕ 5.30 ಗ್ರಾಮ್<br>2. ಚಿನ್ನದ ಉಂಗುರ ಮಕ್ಕಳದ್ದು ತೂಕ 500 ಮಿ.ಗ್ರಾಮ್. |
| 18. | 30/02 ಕಲಂ 457,380 ಐಪಿಸಿ | 19/02 | ಚಿನ್ನದ ಒಂದು ಕುತ್ತಿನ ಚೈನು ತೂಕ 9 ಗ್ರಾಮ್ |
| 19. | ಸಿ.ಮಿಸ್.ನಂ 542/97 | 47/97 | ಯಮಾಹ ಆರ್.ಎಕ್ಸ್.100 ಮೋಟಾರ್ ಸೈಕಲ್<br>ನಂ.ಟಿ.ಎನ್.23.ವೈ-1823, ಚಾಸೀಸ್ ನಂ. ಮತ್ತು ಇಂಜಿನ್<br>ನಂ. ಇರುವುದಿಲ್ಲ. |
| 20. | ಸಿ.ಮಿಸ್.ನಂ 153/97 | 32/02 | ಕೆನೆಟಿಕ್ ಸ್ಪೈಡ್ ಸ್ಕೂಟರ್ ನಂ. ಕೆಎ-05-ವೈ-3141<br>ಚಾಸಿಸ್ ನಂ.97 ಎಂಜಡ್ 9014739.<br>ಇಂಜಿನ್ ನಂ.97 ಎಂಕ್ಯೂ 2614914. |

| 1 | 2 | 3 | 4 |
|---|---|---|---|
| 21. | 254/02 ಕಲಂ 41(2)ರೆ/ವಿತ್ 102 ಸಿ.ಆರ್.ಪಿ.ಸಿ. | 97/02 | ಆಟೋರಿಕ್ಷಾ ನಂ. ಕೆಎಲ್-8-ಜಿ-311, ಚಾಸಿಸ್ ನಂ.24-ಸಿ-062371, ಇಂಜಿನ್ ನಂ.24-ಇ-059552. |
| 22. | 254/02 ಕಲಂ 41(2)ರೆ/ವಿತ್ 102 ಸಿ.ಆರ್.ಪಿ.ಸಿ. | 100/02 | ಆಟೋರಿಕ್ಷಾ ನಂ: ಕೆಎಲ್-10-ಇ-642, ಚಾಸಿಸ್ ನಂ.94-ಎಫ್-9942159, ಇಂಜಿನ್ ನಂ.24-ಎಮ್-96421959. |
| 23. | 254/02 ಕಲಂ 41(2)ರೆ/ವಿತ್ 102 ಸಿ.ಆರ್.ಪಿ.ಸಿ. | 103/02 | ಆಟೋರಿಕ್ಷಾ ನಂ. ಕೆಎಲ್-12-5626, ಚಾಸಿಸ್ ನಂ.ಎಫ್-95-ಹೆಚ್-37508, ಇಂಜಿನ್ ನಂ.24-ಎಂ-95-ಹೆಚ್-36718. |
| 24. | 254/02 ಕಲಂ 41(2)ರೆ/ವಿತ್ 102 ಸಿ.ಆರ್.ಪಿ.ಸಿ. | 16/03 | ಬಜಾಜ್ ಸ್ಕೂಟರ್ ನಂ. ಸಿಕೆಎಲ್-8993, ಚಾಸಿಸ್ ನಂ.05-ಸಿ-186622, ಇಂಜಿನ್ ನಂ.05-ಇ-185522. |

XI Add. Chief Motropolitan Magistrate,
Bangalore City.

ಪಿ.ಆರ್. 1344

**ಜಿಲ್ಲಾ ಸಮಾಜ ಕಲ್ಯಾಣಧಿಕಾರಿಗಳ ಕಛೇರಿ, ಶಿವಮೊಗ್ಗ ಜಿಲ್ಲೆ**

**ಪ್ರಕಟಣೆ ಸಂಖ್ಯೆ: ಜಪಂಶಿ:ಜಿಸಕಅ:ವಿ7:ಸಿಆರ್:14:03-04, ದಿನಾಂಕ: 20ನೇ ನವೆಂಬರ್ 2003**

**ವಿಷಯ:** 2003-04ನೇ ಸಾಲಿಗೆ ಪರಿಶಿಷ್ಟ ಜಾತಿ : ವರ್ಗದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣ ತರಬೇತಿಗಾಗಿ ಅರ್ಜಿ ಆಹ್ವಾನಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶದ ಸಂಖ್ಯೆ: ಎಸ್‌ಡಬ್ಲ್ಯೂಎಲ್:68:ಎಸ್ಇಡಬ್ಲ್ಯೂ:89, ದಿನಾಂಕ: 02.11.1990.

2003-04ನೇ ಸಾಲಿನಲ್ಲಿ ಸಮಾಜ ಕಲ್ಯಾಣ ಇಲಾಖೆ ವತಿಯಿಂದ ಆಡಳಿತ ನ್ಯಾಯಾಧೀಕರಣದಲ್ಲಿ ನಾಲ್ಕು ವರ್ಷಗಳ ತರಬೇತಿಗಾಗಿ ಶಿವಮೊಗ್ಗ ಜಿಲ್ಲೆಯ 07 ಪರಿಶಿಷ್ಟ ಜಾತಿ : ಮತ್ತು 02 ಪರಿಶಿಷ್ಟ ವರ್ಗಗಳ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಕ್ರಿಯಾ ಯೋಜನೆಯಲ್ಲಿ ಗುರಿ ನಿಗದಿಪಡಿಸಲಾಗಿದೆ. ಆದ್ದರಿಂದ ಪರಿಶಿಷ್ಟ ಜಾತಿ : ವರ್ಗಗಳ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಿದೆ. ನಿಗದಿತ ಅರ್ಜಿ ನಮೂನೆಗಳನ್ನು **ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಗಾಂಧಿನಗರ ಮುಖ್ಯ ರಸ್ತೆ, ಶಿವಮೊಗ್ಗ,** ಇಲ್ಲಿ ಕಛೇರಿ ಸಮಯದಲ್ಲಿ ಪಡೆಯಬಹುದು, ಭರ್ತಿ ಮಾಡಿ ಅಗತ್ಯ ದಾಖಲಾತಿಗಳೊಂದಿಗೆ **ದಿನಾಂಕ: 29.12.2003ರ** ಒಳಗೆ ಸಲ್ಲಿಸಬೇಕು. ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**ನಿಬಂಧನೆಗಳು**

1) ಅಭ್ಯರ್ಥಿಗಳು ಶಿವಮೊಗ್ಗ ಜಿಲ್ಲೆಯವರಾಗಿದ್ದು ಪರಿಶಿಷ್ಟ ಜಾತಿ : ವರ್ಗಕ್ಕೆ ಸೇರಿದವರಾಗಿರಬೇಕು.
2) ಕಾನೂನು ಪದವಿಯಲ್ಲಿ ತೇರ್ಗಡೆ ಹೊಂದಿ ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕಕ್ಕೆ ಎರಡು ವರ್ಷಗಳು ಮೀರಿರಬಾರದು.
3) ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು 18 ರಿಂದ 35 ವರ್ಷದ ಮಿತಿಯೊಳಗಿರಬೇಕು.
4) ತರಬೇತಿಯನ್ನು ಶಿವಮೊಗ್ಗ ಜಿಲ್ಲೆಯಲ್ಲಿಯೇ ಪಡೆಯಬೇಕು.
5) ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯ ಮೂಲಕ ಸಂದರ್ಶನಕ್ಕೆ ಕರೆದು ಅಭ್ಯರ್ಥಿಗಳನ್ನು ತರಬೇತಿಗಾಗಿ ಆಯ್ಕೆ ಮಾಡಲಾಗುವುದು.
6) ಆಯ್ಕೆಯಾದ ಅಭ್ಯರ್ಥಿಗಳು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್, ಸರ್ಕಾರಿ ವಕೀಲರು ಅಥವಾ 20 ವರ್ಷಗಳ ಕಾಲಕ್ಕೆ ಕಡಿಮೆ ಇಲ್ಲದಂತೆ ವಕೀಲಿ ವೃತ್ತಿಯಲ್ಲಿ ಸೇವೆ ಸಲ್ಲಿಸಿರುವ ನ್ಯಾಯವಾದಿಗಳ ಬಳಿ ತರಬೇತಿ ಪಡೆಯಬೇಕು.
7) ಈ ತರಬೇತಿಯ ಅವಧಿಯಲ್ಲಿ ಹಾಜರಾತಿ ಹಾಗೂ ದಿನಚರಿಗಳನ್ನು ಪಡೆದು ಅದನ್ನು ಪರಿಶೀಲಿಸಿ, ಪ್ರತಿ ಮಾಹೆ ರೂ.1000-00 (ರೂ.ಒಂದು ಸಾವಿರ) ಗಳ ದರದಲ್ಲಿ ಮಾತ್ರ ತರಬೇತಿ ಭತ್ಯೆಯನ್ನು ಹಾಜರಾತಿ ಅನುಸರಿಸಿ ಪಾವತಿಸಲಾಗುವುದು.
8) ಈ ತರಬೇತಿಗಾಗಿ ಅರ್ಜಿ ಸಲ್ಲಿಸಲು ಇಚ್ಛಿಸುವ ಅಭ್ಯರ್ಥಿಗಳು ಕೊನೆಯ ದಿನಾಂಕದ ಒಳಗೆ ಭರ್ತಿ ಮಾಡಿದ ಅರ್ಜಿಯೊಂದಿಗೆ ಎಸ್‌ಎಸ್‌ಎಲ್‌ಸಿ ಹಾಗೂ ಅದಕ್ಕಿಂತ ಮೇಲ್ಪಟ್ಟ ಎಲ್ಲಾ ಪರೀಕ್ಷೆಗಳ ಅಂಕ ಪಟ್ಟಿಗಳು ಜಾತಿ ದೃಢೀಕರಣ ಪತ್ರಗಳನ್ನು ಸಕ್ಷಮ ಅಧಿಕಾರಿಗಳಿಂದ ಪಡೆದು ನ್ಯಾಯವಾದಿ ವೃತ್ತಿಯನ್ನು ಪ್ರಾರಂಭಿಸಲು ಬೇಕಾಗುವ ಬಾರ್‌ಕೌನ್ಸಿಲ್‌ನ ನೋಂದಣಿ ಪ್ರಮಾಣ ಪತ್ರದ ಪ್ರತಿಯೊಂದಿಗೆ ದ್ವಿಪ್ರತಿಯಲ್ಲಿ ಅರ್ಜಿ ಸಲ್ಲಿಸಬೇಕು.
9) ಅಭ್ಯರ್ಥಿಯು ಯಾವುದೇ ಸರ್ಕಾರಿ, ಅರೆ ಸರ್ಕಾರಿ ನೌಕರಿಯಲ್ಲಿರಬಾರದು. ವಿದ್ಯಾಭ್ಯಾಸ ಮಾಡುತ್ತಿರಬಾರದು.
10) ಆಯ್ಕೆ ಅಭ್ಯರ್ಥಿಯು ಸುಳ್ಳು ದಾಖಲಾತಿ ನೀಡಿ ಆಯ್ಕೆಯಾಗಿದ್ದು ಕಂಡು ಬಂದಲ್ಲಿ ಅಂತಹವರ ಆಯ್ಕೆಯನ್ನು ರದ್ದುಪಡಿಸಲಾಗುವುದು ಮತ್ತು ಈ ಸಂಬಂಧವಾಗಿ ಪಡೆದ ಶಿಷ್ಯವೇತನವನ್ನು ಬಡ್ಡಿ ಸಮೇತ ಹಿಂದಿರುಗಿಸಬೇಕಾಗುವುದು.
11) ಅಭ್ಯರ್ಥಿಗಳು ಸರ್ಕಾರದಿಂದ ರೂಪಿಸಲಾದ ನಿಯಮಗಳಿಗೆ ಬದ್ಧನಾಗಿರುವ ಬಗ್ಗೆ, ತರಬೇತಿ ಅವಧಿಯು ನಾಲ್ಕು ವರ್ಷವಿದ್ದು, ತರಬೇತಿಯನ್ನು ಮಧ್ಯದಲ್ಲಿ ಬಿಡದಿರುವ ಬಗ್ಗೆ ಒಂದು ಮುಚ್ಚಳಿಕೆ ಪತ್ರವನ್ನು ರೂ.20-00 ಬೆಲೆಯ ಛಾಪಾ ಕಾಗದದಲ್ಲಿ ಬರೆದುಕೊಡಬೇಕು. ಒಂದು ವೇಳೆ ತರಬೇತಿ ಮಧ್ಯದಲ್ಲಿ ಬಿಟ್ಟರೆ ಅದುವರೆಗೂ ಪಡೆದಿರುವ ಶಿಷ್ಯವೇತನವನ್ನು ವಾರ್ಷಿಕ ಶೇ.10ರ ಬಡ್ಡಿ ದರದಲ್ಲಿ ಸರ್ಕಾರಕ್ಕೆ ಮರು ಪಾವತಿಸಲು ಬದ್ಧರಾಗಿರಬೇಕು. ಇಲ್ಲವಾದಲ್ಲಿ ಭೂಕಂದಾಯ ಬಾಕಿ ವಸೂಲಿಯಂತೆ ವಸೂಲಿ ಮಾಡಲಾಗುವುದು.
12) ಆಯ್ಕೆಯಾದ ಅಭ್ಯರ್ಥಿಯು ನಿಗದಿತ ದಿನಾಂಕದೊಳಗಡೆ ಹಾಜರಾಗದಿದ್ದರೆ ಅಂತಹವರ ಆಯ್ಕೆಯನ್ನು ರದ್ದುಪಡಿಸಲಾಗುವುದು.

13) ಅಭ್ಯರ್ಥಿಯು ಸಂದರ್ಶನಕ್ಕೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

14) ಅಪೂರ್ಣ ಮಾಹಿತಿಗಳಿಂದ ಕೂಡಿದ ಅರ್ಜಿಗಳನ್ನು ಮತ್ತು ನಿಗದಿತ ದಿನಾಂಕದ ನಂತರ ಸ್ವೀಕೃತಿಯಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ,
ಶಿವಮೊಗ್ಗ ಜಿಲ್ಲೆ.

ಪಿ.ಆರ್. 1346

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಸಾಗರ ವಿಭಾಗ, ಸಾಗರ**

**ಕ್ರ: ಎ6.ಟಿಬಿಆರ್:ಎಂಪಿ:ಸಿಆರ್.4/2003-04 ದಿನಾಂಕ: 22ನೇ ನವೆಂಬರ್ 2003**

**ಸಾರ್ವಜನಿಕರ ಗಮನಕ್ಕೆ**

ಈ ಮೂಲಕ ಸಾಗರ, ಹೊಸನಗರ, ಶಿಕಾರಿಪುರ, ಸೊರಬ ತಾಲ್ಲೂಕುಗಳ ಸಾರ್ವಜನಿಕರ ಗಮನಕ್ಕೆ ತರಬಯಸುವುದೇನೆಂದರೆ ಈ ಕಛೇರಿಗೆ ಮಲೆನಾಡಿನ ನಾಗರೀಕರು ಎಂದು ನಮೂದಿಸಿ ಕಳುಹಿಸಲಾದ ಪತ್ರದಲ್ಲಿ ಖಾನೇಷುಮಾರಿ ಪ್ರದೇಶದಲ್ಲಿನ ಮರಗಳ ಕಡಿತಲೆ ಸಂಬಂಧದಲ್ಲಿ ಸರ್ವೆ ನಂಬರ್: ಬಗರ್ ಹುಕುಂ ಕಾಡು ಏನನ್ನೂ ಲೆಕ್ಕಿಸದೆ ಖಾನೇಷುಮಾರಿಗೆ ಸಂಬಂಧಪಟ್ಟ ಜಮೀನು ಎಂದು ತೋರಿಸಿ ಗ್ರಾಮ ಪಂಚಾಯತ್‌ನಿಂದ ಸುಳ್ಳು ದಾಖಲಾತಿಗಳನ್ನು ಪಡೆದು ಮರಗಳ ಕಡಿತಲೆಗೆ ಅನುಮತಿ ಪಡೆಯುತ್ತಿದ್ದಾರೆ. ಈ ಸಂಬಂಧದಲ್ಲಿ ತಮ್ಮಲ್ಲಿ ದಾಖಲಾತಿಗಳು ಇರುವುದಾಗಿ ಅವುಗಳನ್ನು ಹಾಜರ್ಪಡಿಸಲು ಸಿದ್ಧರಿರುವುದಾಗಿ ಹೇಳಿರುತ್ತೀರಿ. ಈ ಸಂಬಂಧದಲ್ಲಿ ಸಾರ್ವಜನಿಕರಲ್ಲಿ ವಿನಂತಿಸುವುದೇನೆಂದರೆ ಖಾನೇಷುಮಾರಿ, ಖಾಸಗೀ ಪ್ರದೇಶಗಳನ್ನು ಹೊರತುಪಡಿಸಿ ಇತರೆ ಪ್ರದೇಶದಲ್ಲಿ ಅಂದರೆ ಅರಣ್ಯ, ಸರ್ಕಾರಿ ಜಮೀನುಗಳಲ್ಲಿ ಇದ್ದ ಮರಗಳನ್ನು ಖಾನೇಷುಮಾರಿ ಎಂದು ತೋರಿಸಿ ಸುಳ್ಳು ದಾಖಲೆಗಳನ್ನು ಸೃಷ್ಟಿಸಿದ ಬಗ್ಗೆ ದಾಖಲಾತಿಗಳಿದ್ದಲ್ಲಿ ಅವುಗಳನ್ನು ಈ ಕಛೇರಿಯಿಂದ ಪ್ರಕಟಣೆಯಾದ 15 ದಿನಗಳೊಳಗಾಗಿ ಈ ಕಛೇರಿಗೆ ಖುದ್ದಾಗಿ ಹಾಜರುಪಡಿಸಲು ಕೋರಲಾಗಿದೆ. ಅವಶ್ಯವಿದ್ದಲ್ಲಿ ದಾಖಲಾತಿಗಳನ್ನು ಹಾಜರುಪಡಿಸಿದವರ ಗುರುತನ್ನು ಗೌಪ್ಯವಾಗಿ ಇಡಲಾಗುವುದು ಎಂದು ತಿಳಿಯಪಡಿಸಲಾಗಿದೆ. ಒಂದು ವೇಳೆ ನಿಮ್ಮ ಗುರುತನ್ನು ಪ್ರಕಟಿಸಲು ಇಚ್ಛೆ ಇಲ್ಲದೇ ಇದ್ದಲ್ಲಿ ಪತ್ರದ ಮುಖಾಂತರ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರಿಗೆ ನೇರವಾಗಿ ಕಳುಹಿಸಿಕೊಡಲು ಕೋರಿದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 1347

**PROCEEDINGS OF THE REGISTRAR OF CO-OPERATIVE SOCIETIES IN KARNATAKA, BANGALORE**

**No: LDB/5/LFD/2003-04, dated: 25th November 2003**

**Sub:** Floatation of Special Development Debentures by the KSCA&RD Bank under various schemes for Rs.4,63,15,500/- issue of orders-reg.

**Ref:** (1) Proposal No: FS/DEB/542/2003-04 dated: 19.11.2003 of the KSCA&RD Bank Ltd., Bangalore addressed to NABARD, Bangalore, forwarding the proposal for Floatation of Special Development Debentures for Rs.4,63,15,500/- for their approval.

(2) Letter No: NB/(BL)/ICD/6913/LDB-12/2003-04, Dated: 21.11.2003 of the NABARD, Bangalore addressed to the Managing Director, KSCA&RD Bank, under copy to the Registrar of Co-operative Societies in Karnataka, Bangalore conveying their approval to the proposal cited above at 1, for Rs.4,63,15,500/-

(3) Government O.M. No.FD 95 RLG 68, Dated: 11.11.1971.

(4) Letter No. CMW:134:CLS:2002, Bangalore Dated: 1.8.2003 sanctioning the Government Guarantee for Rs.166.00 crores on behalf of the KSCA&RD Bank for the year 2003-2004.

(5) Proposal No.FS/DEB/548/2003-04, dated: 24.11.2003 of the KSCA & RD Bank addressed to this office requesting for issue of orders for the floatation of the debentures approved by the NABARD as cited in Ref.2 above.

**PREAMBLE:**

The Karnataka State Co-operative Agriculture and Rural Development Bank Ltd., in its letter cited (1) has forwarded a proposal to the National Bank for Agriculture and Rural Development, Bangalore for floatation of Special Development Debentures under Various schemes for Rs.4,63,15,500/- and has requested them for their approval. On considering the proposal of the KARNATAKA STATE CO-OPERATIVE AGRICULTURE AND RURAL DEVELOPMENT BANK cited above at (1) the National Bank for Agriculture and Rural Development, Bangalore in their letter above at (2) has conveyed their approval for the floatation and agreed to subscribe to Special Development Debentures floated by the Bank to the extent of Rs.4,27,64,900/- The contribution from State Government and Central Government is to the extent of Rs.17,75,300/- each. Government in its O.M. cited above at (3) has prescribed the terms and conditions to be imposed by Government while guaranteeing the debentures to be floated by any institution. In the Government order cited above at (4), Government has issued the Government guarantee on behalf of the Karnataka State Co-operative Agriculture and Rural Development Bank for the

year 2003-2004 and has authorised the Registrar of Co-operative Societies to issue order etc., upto Rs.10.00 crore on each occasion, and to make the contribution to the debentures according to the pattern approved by the NABARD. All the relevant terms and conditions applicable to the Karnataka State Co-operative Agriculture and Rural Development Bank as per references cited above at (3) and (4) are to be followed. The Karnataka State Co-operative Agriculture and Rural Development Bank, in its letter cited at (5) has requested this office for issue of orders for floatation of debentures as approved by the National Bank for Agriculture and Rural Development vide reference cited above at (2).

**ORDER**

1) Registrar of Co-operative Societies in Karnataka, Bangalore, hereby permits the Karnataka State Co-operative Agriculture and Rural Development Bank Ltd., Bangalore, to float Special Development Debentures to the extent of Rs.4,63,15,500/- (Rupees Four Crores Sixty three lakhs Fifteen thousand Five hundred only) limiting the amount of debentures to the value of accumulated un-encumbered mortgages secured for implementing the National Bank for Agriculture and Rural Development scheme, as per the details indicated hereunder, subject to the terms and conditions stipulated in the **ANNEXURE-1** to this order.
2) Sanction is hereby accorded to contribute a sum of Rs.17,75,300/- (Rupees Seventeen lakhs Seventyfive thousand Three hundred only/-) being the State Government share of contribution to the various Special Development Debentures to be floated by the Karnataka State Co-operative Agriculture and Rural Development Bank Ltd., Bangalore, as approved by the National Bank for Agriculture and Rural Development vide their letter above at (2).
3) The currency for floating these debentures would be up to 31.12.2003.
4) General Manager and Manager of the Karnataka State Co-operative Agriculture and Rural Development Bank are authorised jointly to draw the amount on a payees receipt duly countersigned by the Additional Registrar of Co-operative Societies (ADM & DEV), Head Office, Bangalore.
   The expenditure of Rs.17,75,300/- (Rupees: Seventeen lakhs Seventyfive thousand Three hundred Only) in this behalf towards Government of Karnataka share of contribution may be met under the budget Head "6416-Loans for Agricultural Financial Institutions-190 Loans to public sector and other undertakings-1-K.S. Co-operative Agriculture and R.D. Bank-01 Loans for purchase of debentures." (6416-00-190-1-01)

Registrar of Co-operative Societies.,
in Karnataka, Bangalore.

P.R. 1348

**ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಕೇಂದ್ರ ಕಛೇರಿ, ಬೆಂಗಳೂರು-52 ಇವರ ನಡವಳಿಕೆಗಳು**

**ಸಂಖ್ಯೆ: ಆರ್‌ಸಿಎಸ್:ಸಮಾಪನೆ:51:99-2000, ದಿನಾಂಕ: 27ನೇ ನವೆಂಬರ್ 2003**

**ವಿಷಯ:** ಎನ್.ಜಿ.ಇ.ಎಫ್. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ (ನಿ), ಬೆಂಗಳೂರು ಸಂಘದ ಸಮಾಪನಾಧಿಕಾರಿಗಳ ಬದಲಾವಣೆ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ಇದೇ ಕ್ರಮಾಂಕದ ಸಮಾಪನಾದೇಶ ದಿನಾಂಕ: 22.7.2000.

2. ಸಮಾಪನಾಧಿಕಾರಿಗಳು ಹಾಗೂ ಸಹಕಾರ ಸಂಘಗಳ ಉಪನಿಬಂಧಕರು-2 ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ಎನ್‌ಜಿಇಎಫ್.ಇ.ಹೆಚ್‌ಬಿಸಿಎಸ್:79:03-04, ದಿನಾಂಕ: 16.10.2003.

**ಪೀಠಿಕೆ:**

ಎನ್.ಜಿ.ಇ.ಎಫ್. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ (ನಿ) ಬೆಂಗಳೂರು ಈ ಸಂಘದ ಸಮಾಪನಾದೇಶದಲ್ಲಿ ಸಿಟಿ ಸಿವಿಲ್ ಕೋರ್ಟ್‌ನಲ್ಲಿ ಪ್ರಕರಣ ಸಂಖ್ಯೆ: 3891:91 ಮತ್ತು 4215:94 ಬದಲಾಗಿ ಸಂಖ್ಯೆ: 3891:91 ಮತ್ತು 4215:99 ಎಂಬುದಾಗಿ ಇರುತ್ತದೆ. ಆದ್ದರಿಂದ ತಿದ್ದುಪಡಿ ಮಾಡಿ ಆದೇಶ ಹೊರಡಿಸಬೇಕಾಗಿ ಉಲ್ಲೇಖ (2)ರ ಪತ್ರದಲ್ಲಿ ಉಪನಿಬಂಧಕರು ಬೆಂಗಳೂರು-2 ಹಾಗೂ ಎನ್.ಜಿ.ಇ.ಎಫ್. ನೌಕರರ ಗೃಹ ನಿರ್ಮಾಣ ಸಹಕಾರ ಸಂಘದ ಸಮಾಪನಾಧಿಕಾರಿ ಬೆಂಗಳೂರು-2 ಇವರು ಕೋರಿರುತ್ತಾರೆ.

ಸಮಾಪನಾಧಿಕಾರಿಗಳು ಹಾಗೂ ಸಹಕಾರ ಸಂಘಗಳ ಉಪನಿಬಂಧಕರು-2 ಬೆಂಗಳೂರು ಇವರ ಕೋರಿಕೆಯ ಮೇರೆಗೆ ತಿದ್ದುಪಡಿ ಆದೇಶ ಹೊರಡಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ತಿದ್ದುಪಡಿ ಆದೇಶ**

ಆದೇಶ ಸಂಖ್ಯೆ: ಆರ್‌ಸಿಎಸ್:ಸಮಾಪನೆ:51:99-2000, ದಿನಾಂಕ: 19.9.2003 ರಲ್ಲಿ ಸಿಟಿ ಸಿವಿಲ್ ಕೋರ್ಟಿನಲ್ಲಿ ಪ್ರಕರಣ ಸಂಖ್ಯೆ: 3891:90-91 ಮತ್ತು 4215:99 ಎಂದು ಇರುವುದನ್ನು ಸಂಖ್ಯೆ: 3891:91 ಮತ್ತು 4215:94 ಎಂದು ಓದಿಕೊಳ್ಳುವುದು.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಈ ಕಛೇರಿಯ ಮೊಹರು ನಿಶಿಯೊಂದಿಗೆ ಈ ದಿನ ದಿನಾಂಕ: 27.11.2003 ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಅಪರ ನಿಬಂಧಕರು
(ಕೈಗಾರಿಕೆ ಮತ್ತು ಇತರೆ)

ಪಿ.ಆರ್. 1349